ದೇವರ ಕೊಂಡಾರೆಡ್ಡಿ

# ಸತ್ಯವಾಕ್ಯನ ಹಿರೇಕಾಟಿ ಶಾಸನ

ಗುಂಡ್ಲು ಪೇಟೆ-ನಂಜನಗೂಡು ರಸ್ತೆಯಲ್ಲಿ, ಗುಂಡ್ಲು ಪೇಟೆಯಿಂದ ೧೪ ಮೈಲಿ ದೂರದಲ್ಲಿ ಹಿರೇಕಾಟಿಯಿದೆ. ಈ ಊರಿನ ಹಿಂಬದಿಯಲ್ಲಿ ಕಲ್ಲುಗಣಿ ಇದೆ. ಹಿಂದೆ ಇಲ್ಲಿ ಎತ್ತರವಾದ ಕಲ್ಲುಗುಡ್ಡವಿದ್ದು ಈಗ ಸಂಪೂರ್ಣವಾಗಿ ಸೀಳಿ ನೆಲಸಮ ಮಾಡಿರುತ್ತಾರೆ. ಒಂದು ಗುಡ್ಡದಲ್ಲಿ ದೇವಾಲಯವಿದ್ದು, ಇದನ್ನು ಮಾತ್ರ ಮುಟ್ಟದೆ ಅದು ಹಾಗೆಯೇ ಎತ್ತರವಾಗಿ ಉಳಿದಿದೆ. ಈ ಗುಡ್ಡದ ಮೇಲೆ ಚಂದ್ರಶೇಖರ ದೇವಾಲಯವಿದ್ದು, ಈ ದೇವಾಲಯದ ಪ್ರಾಕಾರದ ಹೊರಗೆ ಈಶಾನ್ಯ ಮೂಲೆಯಲ್ಲಿ ಮೇಲೆ ಹೆಸರಿಸಿರುವ ಶಾಸನ ಲಿಪಿ ನಿಂತಿದೆ.

ಶಾಸನವು ೪ ಅಡಿ ಉದ್ದ ೨ ಅಡಿ ಅಗಲವಾಗಿದ್ದು ೧೨ ಸಾಲುಗಳನ್ನು ಹೊಂದಿದೆ. ಶಾಸನ ಪಾಠದ ತಳದಲ್ಲಿ ಹಸುಕರುವಿನ ರೇಖಾಚಿತ್ರವಿದ್ದು ಇವುಗಳ ಹಿಂಬದಿಯಲ್ಲಿ ಸೂರ್ಯಚಂದ್ರರನ್ನು ಸೂಚಿಸುವ ಸಣ್ಣ ರೇಖಾ ಗೆರೆಯಿದೆ. ಶಾಸನದಲ್ಲಿ ಆರನೆಯ ಸಾಲನ್ನು ಶಾಸನದ ಪಾಠವನ್ನು ಉತ್ಕೀರ್ಣಿಸಿದನಂತರ ಬರೆದಿರುವಂತೆ ತಿಳಿಯುತ್ತದೆ. ೫ ಮತ್ತು ೭ನೇ ಸಾಲಿನ ಮಧ್ಯೆ ಜಾಗವಿರುವೆಡೆಯಲ್ಲೆಲ್ಲಾ ಈ ಸಾಲನ್ನು ಸಣ್ಣಗೆ ಕೆತ್ತಿದೆ. ಶಾಸನದಲ್ಲಿ ಬಂದಿರುವ 'ವ'ಕಾರ ಮತ್ತು 'ಮ'ಕಾರಗಳು ಎಲ್ಲಾ ಕಡೆ ಬಾಯಿ ಬಿಡದಿದ್ದರೂ ಒಂದನೇ ಸಾಲಿನಲ್ಲಿ ಬರುವ ವರ್ಮ ಎಂಬಲ್ಲಿನ 'ಮ'ಕಾರ ಮಾತ್ರ ಬಾಯಿ ಬಿಟ್ಟಿದೆ. ಶಕಟರೇಫ ಸ್ಪಷ್ಟ ಆಕಾರವನ್ನು ಪಡೆದಿದೆ. 'ಎ'ಕಾರದ ತಲೆಕಟ್ಟು ಕೆಲವು ಕಡೆ ಮಾತ್ರ ಎಡಕ್ಕೆ ಬಾಗಿದ್ದರೂ ಬಹುತೇಕ ಬಲಕ್ಕೆ ತಿರುಗಿ ಮೇಲಕ್ಕೆ ಏರಿದೆ.

ಶಾಸನವು ಸತ್ಯವಾಕ್ಯ ಕೊಙ್ಗುಣೀವರ್ಮನ ಬಿರುದುಗಳಿಂದ ಪ್ರಾರಂಭವಾಗುತ್ತದೆ. ಇವನ ರಾಜ್ಯಭಾರದಲ್ಲಿ ಕ್ರಾನ್ತಯ ಎಂಬುವವನು ಬೆಟ್ಟ ಮಹಾದೇವರಿಗೆ ಕಾರೆನಾಡಿನ ಎಪ್ಪತ್ತು ನಾಟ್ಗಾಮುಣ್ಡರ ಸಾಕ್ಷಿಯಾಗಿ ಮೂವತ್ತು ಗದ್ಯಾಣ ಪೊನ್ ಮತ್ತು ಮಣ್ಣನ್ನು ನೀಡುತ್ತಾನೆ.

ಈ ಶಾಸನದಲ್ಲಿ ರಾಜನ ಆಳ್ವಿಕೆಯ ವರ್ಷವಾಗಲೀ ಶಕ ಕಾಲವಾಗಲೀ ಉಲ್ಲೇಖವಾಗಿಲ್ಲ; ಸತ್ಯವಾಕ್ಯ ಎಂಬ ವಿಶೇಷಣ ಉಕ್ತವಾಗಿದೆ. ಈ ವಿಶೇಷಣವು ಒಂದನೆಯ ರಾಚಮಲ್ಲನ ಕಾಲದಿಂದೀಚೆಗೆ ಒಂದು ಆಳ್ವಿಕೆಯ ತಲೆ ಬಿಟ್ಟು ಇನ್ನೊಂದು ಆಳ್ವಿಕೆಯ ತಲೆಗೆ ಸಾಗಿ ಬಂದಿದೆ. ಸತ್ಯವಾಕ್ಯ ಎಂಬ ಈ ವಿಶೇಷಣವು ಒಂದನೆಯ ರಾಚಮಲ್ಲ, ಎರಡನೆಯ ರಾಚಮಲ್ಲ, ನರಸಿಂಹ, ಇಮ್ಮಡಿ ಬೂತುಗ, ಮಾರಸಿಂಹ ಮತ್ತು ನಾಲ್ಕನೆಯ ರಾಚಮಲ್ಲರಿಗೆ ಅನ್ವಯಿಸುತ್ತದೆ. ಈ ಮೇಲೆ ಹೆಸರಿಸಿದ ಅರಸರಲ್ಲಿ ಈ ಶಾಸನದಲ್ಲಿ ಉಕ್ತನಾಗಿರುವ ಸತ್ಯವಾಕ್ಯನಾರು ಎಂದು ನಿರ್ಣಯಿಸುವುದು ಸೂಕ್ಷ್ಮ. ಶಾಸನದಲ್ಲಿ ದಾನದ ವಿಷಯ ತಿಳಿಸುವಾಗ 'ನರಗ' ಎಂಬ ಉಲ್ಲೇಖ ಬರುತ್ತದೆ. ಇದನ್ನು ಪುರುಷವಾಚಕವಾಗಿ ಪರಿಗಣಿಸಿದರೆ ಈ ಶಬ್ದ ಇಮ್ಮಡಿ ಬೂತುಗನ ಸು. ಕ್ರಿ. ಶ. ೯೫೦ ರ ಕಲ್ಕುಣಿ ಶಾಸನದಲ್ಲಿ, ಸತ್ಯವಾಕ್ಯ ಮಾರಸಿಂಹನ ಸು. ಕ್ರಿ. ಶ. ೯೭೨ರ ಆಸಂದಿ ಶಾಸನದಲ್ಲಿ ಕಾಣಸಿಗುತ್ತದೆ. ಈ ಆಧಾರದ ಮೇಲೆ ಮತ್ತು ಲಿಪಿಯ ಆಧಾರದ ಮೇಲೆ ಇದರ ಕಾಲವನ್ನು ಸು. ಕ್ರಿ. ಶ. ೯೭೫ ಎಂದು ಹೇಳಬಹುದು.

ದೇವಾಲಯವೂ ಇದೇ ಕಾಲದಲ್ಲಿ ರಚಿತವಾಗಿದ್ದಿರ ಬಹುದು.

ಶಾಸನದಲ್ಲಿ ಬರುವ ಪಾಠವನ್ನು ಗಮನಿಸಿದಾಗ ಅರ್ಥ ಸ್ಪಷ್ಟವಾಗುವುದಿಲ್ಲ. ಶಾಸನದಲ್ಲಿ ಸಣ್ಣಗೆ ಬರೆದಿರುವ ಆರನೆಯ ಸಾಲನ್ನು ಬಹುಶಃ ಎಂಟನೆಯ ಸಾಲಾದ ಮೇಲೆ ಓದಿದರೆ ಅರ್ಥ ಸ್ಪಷ್ಟವಾಗುತ್ತದೆ. ಆಗ ಇದರ ಅರ್ಥ 'ಕ್ರಾನ್ತಯ, ನರಗ ಕಾರೆನಾಡು ಎಱ್ಪತ್ತು ನಾಱ್ಗಮಣ್ಡು ಸಾಕ್ಷಿಯಾಗಿ ಎಲಚಿಗೆರೆ ಬೆಟ್ಟಮಹಾದೇವರ್ಗೆ ಮೂವತ್ತು ಗದ್ಯಾಣ ಪೊನ್ ಮತ್ತು ಉಳಿಕೆ ಕಾಲಭಾಗದಲ್ಲಿ ಮಣ್ಣನ್ನು ಧರ್ಮವಾಗಿ ಪಡೆದು ದಾನ ಬಿಡುತ್ತಾನೆ' ಎಂದಾಗುತ್ತದೆ.

ಶಾಸನದಲ್ಲಿ ಬಂದಿರುವ ಕಾರೆನಾಡು ಇದೇ ಗುಡ್ಡದ ಹಿಂಬದಿಯಲ್ಲಿದ್ದು ಹೆಗ್ಗಡದೇವನಕೋಟೆ ತಾಲೂಕಿಗೆ ಸೇರಿದೆ. ಎಲಚಗೆಱೆಯು ಬೆಟ್ಟದ ಈಶಾನ್ಯಕ್ಕಿದ್ದು, ಗುಂಡ್ಲುಪೇಟೆ–ನಂಜನಗೂಡು ರಸ್ತೆಯಲ್ಲಿದ್ದು ನಂಜನಗೂಡು ತಾಲೂಕಿಗೆ ಸೇರಿದೆ. 'ನರಗ ಮತ್ತು ಎಪ್ಪತ್ತು ನಾಱ್ಗಮುಂಡ ಸಾಕ್ಷಿ' ಎಂದಿರುವುದರಿಂದ 'ನರಗ' ಎಂಬುದು ಇಲ್ಲಿ ಪುರುಷವಾಚಕವಾಗಿ ಬಂದಿದೆ ಎನ್ನಬೇಕಾಗುತ್ತದೆ. ಅಂದರೆ ರಾಜ ಎಂಬ ಅರ್ಥ ಪ್ರಾಪ್ತವಾಗುತ್ತದೆ. ಈ ನರಗ ಶಾಸನದ ಆರಂಭದಲ್ಲಿ ಉಕ್ತನಾಗಿರುವ ಸತ್ಯವಾಕ್ಯ ಪೆರ್ಮಾನಡಿ ಇರಬೇಕು. ಬೆಟ್ಟ ಮಹಾದೇವರು ಈಗಿನ ಚಂದ್ರಶೇಖರ ದೇವಾಲಯವೇ ಆಗಿದೆ. ಹಿಂದೆ ಅದು ಎಲಚಗೆರೆಗೆ ಸೇರಿದ್ದರೂ ಈಗ ಹಿರೇಕಾಟಿಯ ಗಡಿಗೆ ಸೇರಿದೆ.

**ಶಾಸನ ಪಾಠ**

ಸ್ವಸ್ತಿ ಸತ್ಯವಾಕ್ಯ ಕೊಙ್ಗುಣೀವರ್ಮ
ಧರ್ಮ್ಮ ಮಹಾ ರಾಜಾಧಿರಾಜ ಕೊವ
ಳಾಳ ಪುರವರೇಶ್ವರ ನನ್ಧ ಗಿರಿನಾ
ಥ ಶ್ರೀ ಮತ್ಪೆರ್ಮ್ಮಾನಡಿಗಳ್ ಪ್ರಿಥು
ವೀ ರಾಜ್ಯಂ ಗೆಯ್ಯುತ್ತಿರೆ ಕ್ರಾನ್ತಯ
* ಬೆಟ್ಟ ಮಹಾದೇವರ್ಗ್ಗೆ ಸಾಸನಮಾಗಿ ಕೊಟ್ಟೆದ *
ನರಗ ಕಾರೆನಾಡು ಎಱ್ಪತ್ತು ನಾಱ್ಗ
ಮುಣ್ಡು ಸಾಕ್ಷಿಯಾಗಿ ಎಲಚಿಗೆಱೆ
ಮೂವತ್ತು ಗದ್ಯಾಣ ಪೊನ್ ಕೊಟ್ಟುಗುಳ್ದ
ಕಾಲು ಮಣ್ಣಱೆ ಕೊಣ್ಡು ಬಿಟ್ಟರ ಱಿ ದವ[ಂ]
ವಾರಣಾಸಿಯ ಕೆಱೆಯ ಕಪಿಲೆಯನಱಿದ
ಪಾಪಕ್ಕೆ ಸಲ್ಲುಂ

(ಹಸು ಕರು ಚಿತ್ರ)

ಸತ್ಯವಾಕ್ಯ ಕೊಂಗುಣೀವರ್ಮ ಧರ್ಮ್ಮ ಮಹಾರಾಜನಾದ, ಕೊವಳಾಳ ಪುರವರೇಶ್ವರನಾದ, ನಂದಗಿರಿನಾಥನಾದ ಶ್ರೀಮತ್ಪೆರ್ಮಾನಡಿ ರಾಜ್ಯಭಾರ ಮಾಡುತ್ತಿದ್ದಾಗ ಕ್ರಾನ್ತಯನು ನರಗ ಮತ್ತು ಕಾರೆನಾಡು ಎಪ್ಪತ್ತನಾಲ್ಕು ನಾಡ ಗಾವುಂಡರ ಸಾಕ್ಷಿಯಾಗಿ ಎಲಚಿಗೆರೆ ಬೆಟ್ಟಮಹಾದೇವರಿಗೆ ಸಾಸನಮಾಗಿ ಮೂವತ್ತು ಗದ್ಯಾಣ ಹೊನ್ನನ್ನು ಕೊಟ್ಟು ಉಳಿದ ಕಾಲುಭಾಗದಲ್ಲಿ ಭೂಮಿಯನ್ನು ಪಡೆದು ಧರ್ಮಾರ್ಥವಾಗಿ ಬಿಟ್ಟನು. ಇದನ್ನು ನಾಶಪಡಿಸಿದವನು ವಾರಣಾಸಿಯನ್ನು, ಕೆರೆಯನ್ನು ನಾಶಮಾಡಿದ, ಗೋಹತ್ಯೆ ಮಾಡಿದ ಪಾಪಕ್ಕೆ ಈಡಾಗುತ್ತಾನೆ.

---

* ಈ ಸಾಲನ್ನು ಸಣ್ಣ ಅಕ್ಷರಗಳಲ್ಲಿ ಐದು ಮತ್ತು ಏಳನೇ ಸಾಲುಗಳ ಮಧ್ಯೆ ಜಾಗವಿರುವೆಡೆಯಲ್ಲೆಲ್ಲಾ ಕಂಡರಿಸಿರುತ್ತಾರೆ.